## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 374
ಸದಸ್ಯರ ಹೆಸರು : ಶ್ರೀ ಜಿ. ರಘು ಆಚಾರ್
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನಿಂದ ಚಿತ್ರದುರ್ಗಕ್ಕೆ ಹೋಗುವ ವೋಲ್ವೋ ಬಸ್‌ಗಳು ರಾತ್ರಿ ವೇಳೆ ಚಿತ್ರದುರ್ಗ ಪಟ್ಟಣಕ್ಕೆ ಹೋಗದೆ ಪ್ರಯಾಣಿಕರಿಗೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕ.ರಾ.ರ.ಸಾ.ನಿಗಮದಿಂದ ಬೆಂಗಳೂರು-ದಾವಣಗೆರೆ ಮಾರ್ಗದಲ್ಲಿ ಕಾರ್ಯಾಚರಣೆ ಮಾಡುತ್ತಿರುವ ಐರಾವತ, ಐರಾವತ ಕ್ಲಬ್ ಕ್ಲಾಸ್ ಸಾರಿಗೆಗಳನ್ನು ಚಿತ್ರದುರ್ಗ ಬಸ್ ನಿಲ್ದಾಣದ ಮುಖೇನ ಕಾರ್ಯಾಚರಿಸಲಾಗುತ್ತಿದೆ. |
| ಆ | ವೋಲ್ವೋ ಬಸ್‌ಗಳು ಚಿತ್ರದುರ್ಗ ನಗರ ಬಸ್ ನಿಲ್ದಾಣಕ್ಕೆ ಹೋಗಿ ಬೇರೆ ಊರುಗಳಿಗೆ ತೆರಳಲು ಕೈಗೊಂಡಿರುವ ಕ್ರಮಗಳೇನು: ಇಲ್ಲದಿದ್ದಲ್ಲಿ, ಇದರ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು?(ವಿವರ ನೀಡುವುದು) | ಬೆಂಗಳೂರು-ದಾವಣಗೆರೆ ಮಾರ್ಗದಲ್ಲಿ ಪ್ರತಿನಿತ್ಯ 5 ಐರಾವತ ಹಾಗೂ 14 ಐರಾವತ ಕ್ಲಬ್ ಕ್ಲಾಸ್ ಸಾರಿಗೆಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದ್ದು, ರಾತ್ರಿ ಸಾರಿಗೆಗಳನ್ನು ಒಳಗೊಂಡಂತೆ ಚಿತ್ರದುರ್ಗ ಬಸ್ ನಿಲ್ದಾಣದ ಮುಖೇನ ಕಾರ್ಯಾಚರಿಸಲಾಗುತ್ತಿದೆ.<br>ಸದರಿ ಸಾರಿಗೆಗಳ ಬೆಂಗಳೂರು ನಿರ್ಗಮನ ಸಮಯವು ಕೆಳಕಂಡಂತಿದೆ: (see table below)<br>ಉಳಿದಂತೆ, ದೂರದ ಮಾರ್ಗಗಳಲ್ಲಿ (ಬೆಂಗಳೂರು-ಮುಂಬೈ, ಬೆಂಗಳೂರು-ಶಿರಡಿ, ಬೆಂಗಳೂರು-ಪೂನಾ) ಕಾರ್ಯಾಚರಣೆ ಮಾಡುತ್ತಿರುವ ಐರಾವತ ಕ್ಲಬ್ ಕ್ಲಾಸ್ ಸಾರಿಗೆಗಳನ್ನು ಮಾರ್ಗ ಮಧ್ಯೆ ಇರುವ ಎಲ್ಲಾ ಬಸ್ ನಿಲ್ದಾಣಗಳ ಮುಖೇನ ಕಾರ್ಯಾಚರಿಸಿದಲ್ಲಿ ನೇರ ಪ್ರಯಾಣಿಕರಿಗೆ ಪ್ರಯಾಣದ ಸಮಯ ಹೆಚ್ಚಾಗಿ ಅವರಿಗೆ ಅನಾನುಕೂಲವಾಗುವುದರಿಂದ, ದೂರದ ಮಾರ್ಗಗಳ ಸಾರಿಗೆಗಳನ್ನು ನಿಗದಿತ ಬಸ್ ನಿಲ್ದಾಣಗಳ ಮುಖೇನ ಕಾರ್ಯಾಚರಿಸಲಾಗುತ್ತಿದೆ. |

| ಕ್ರ.ಸ | ಮಾರ್ಗ | ಸಾರಿಗೆ ವರ್ಗ | ಬೆಂಗಳೂರು ನಿರ್ಗಮನ ಸಮಯ |
|---|---|---|---|
| 1 | ಬೆಂಗಳೂರು-ದಾವಣಗೆರೆ | ಐರಾವತ | 15:14, 16:50, 17:20, 23:21, 23:55 |
| 2 | ಬೆಂಗಳೂರು-ದಾವಣಗೆರೆ | ಐರಾವತ ಕ್ಲಬ್ ಕ್ಲಾಸ್ | 05:00, 06:00, 06:55, 07:30, 08:00, 09:01, 12:30, 14:02, 16:00, 17:45, 18:30, 19:15, 23:00, 23:47 |

ಸಂಖ್ಯೆ: ಟಿಡಿ 38 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು